





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಹೇಳಿರಿ- ನಾನು ಅಭಯ ಯಾಚಿಸುತ್ತೇನೆ- ಮಾನವರ ಪ್ರಭುವಿನ-

قُلۡ اَعُوۡذُ بِرَبِّ النَّاسِۙ ١

2. ಮಾನವರ ಸಾಮ್ರಾಟನ-

مَلِكِ النَّاسِۙ ٢

3. ಮಾನವರ ನೈಜ ಆರಾಧ್ಯನ-

اِلٰهِ النَّاسِۙ ٣

4. ಪದೇಪದೇ ಬಂದು ದುಷ್ಪ್ರೇರಣೆ ನೀಡುವವನ ಕೇಡಿನಿಂದ-[1]

مِنۡ شَرِّ الۡوَسۡوَاسِ ۙ الۡخَنَّاسِ ۙ ٤

5. ಜನರ ಮನಸ್ಸುಗಳಲ್ಲಿ ದುಷ್ಪ್ರೇರಣೆ ಉಂಟು ಮಾಡುವವನ ಕೇಡಿನಿಂದ-

الَّذِىۡ يُوَسۡوِسُ فِىۡ صُدُوۡرِ النَّاسِۙ ٥

6. ಅವನು ಯಕ್ಷಗಳ ಪೈಕಿಯಾಗಿರಲಿ, ಮಾನವರ ಪೈಕಿಯಾಗಿರಲಿ.[2]

مِنَ الۡجِنَّةِ وَ النَّاسِ ٦ ع

---

1. ಅರ್ಥಾತ್- ಒಮ್ಮೆ ದುಷ್ಪ್ರೇರಣೆ ನೀಡುವಲ್ಲಿ ಸಫಲನಾಗದಿದ್ದರೆ ಸರಿದು ಬಿಡುತ್ತಾನೆ. ಅನಂತರ ಮತ್ತೆ ಬಂದು ದುಷ್ಪ್ರೇರಣೆ ನೀಡತೊಡಗುತ್ತಾನೆ. ಈ ಪ್ರಯತ್ನವನ್ನು ನಿರಂತರ ಜಾರಿಯಲ್ಲಿರಿಸುತ್ತಾನೆ.
2. ಅರ್ಥಾತ್- ದುಷ್ಪ್ರೇರಣೆ ನೀಡುವವರು ಮಾನವರ ಪೈಕಿಯಲ್ಲಾಗಿರಲಿ, ಜಿನ್ನ್‌ಗಳ (ಯಕ್ಷರ) ಪೈಕಿಯಲ್ಲಾಗಿರಲಿ - ಇಬ್ಬರ ಕೇಡಿನಿಂದಲೂ ನಾನು ಅಭಯ ಯಾಚಿಸುತ್ತೇನೆ.